ಡಾ॥ ಚೂಡಾಮಣಿ ನಂದಗೋಪಾಲ್

# ಕರ್ನಾಟಕಶಿಲ್ಪದಲ್ಲಿ ನಾಟ್ಯಶಾಸ್ತ್ರದ ಪ್ರಯೋಗ

ಕರ್ನಾಟಕದ ಉದ್ದಗಲಕ್ಕೂ ದೇವಾಲಯಗಳ ಶಿಲ್ಪಗಳನ್ನು ವೀಕ್ಷಿಸಿದಾಗ ನಮಗೆ ವಿಪುಲ ಸಂಖ್ಯೆಯಲ್ಲಿ ನಾಟ್ಯಶಿಲ್ಪಗಳು ಕಂಡುಬರುತ್ತವೆ. ಈ ಸುಂದರ ಭಂಗಿಗಳು ಕಣ್ಮನಗಳನ್ನು ಸೆಳೆಯುವುದರೊಂದಿಗೆ ದೇವಾಲಯಗಳ ನಿರ್ಮಾಣಕ್ಕೆ ಒಂದು ಹೊಸ ಆಯಾಮವನ್ನೇ ಇತ್ತಿವೆ. ನಾಟ್ಯಶಿಲ್ಪಗಳ ಬಳಕೆ, ದೇವಾಲಯಗಳ ಆಕಾರ, ರಚನೆಗಳಲ್ಲಿ ವೈವಿಧ್ಯತೆಯನ್ನು ತಂದಿವೆ. ಶಿಲ್ಪಶಾಸ್ತ್ರದ ಆಧಾರದೊಂದಿಗೆ ನಾಟ್ಯಶಾಸ್ತ್ರದ ಹಲವು ಸ್ತರಗಳು ಮಿಳಿತವಾಗಿ ಕರ್ನಾಟಕದ ಶಿಲ್ಪಗಳು ತಮ್ಮದೇ ಒಂದು ಸ್ಥಾನವನ್ನು ಪಡೆಯುವಂತೆ ಮಾಡಿವೆ. ಕರ್ನಾಟಕದಲ್ಲಿ ನಾಟ್ಯಶಾಸ್ತ್ರದ ಸಂಪ್ರದಾಯ ಕ್ರಿಸ್ತಶಕದ ಪ್ರಾರಂಭ ದಿಶೆಯಿಂದಲೂ ಬಳಕೆಗೆ ಬಂದಿರಬಹುದೆಂದು ತಿಳಿಯುತ್ತದೆ. ಒಂದೇ ಸ್ಥಳ ಮತ್ತು ರಚನೆಯಲ್ಲಿ ಶಿಲ್ಪ ಮತ್ತು ನಾಟ್ಯ ಈ ಯುಗಳ ಕಲೆಗಳು ಹೊಸ ರೀತಿಯಲ್ಲಿ ವಿಕಸನಗೊಳ್ಳುತ್ತಾ ಬಂದಿರುವುದನ್ನು ನಾವು ಕಂಡುಕೊಳ್ಳಬಹುದು. 'ಒಬ್ಬ ಉತ್ತಮ ಶಿಲ್ಪಿಯಾಗಲು ಅಥವಾ ಚಿತ್ರಕಾರನಾಗಲು ನಾಟ್ಯಶಾಸ್ತ್ರದ ಅರಿವು ಅವಶ್ಯಕ' ಎಂಬ ಮಾತು ನಾವು ಶಿಲ್ಪಗಳನ್ನು ಪರಿಶೀಲಿಸಿದಾಗ ತಿಳಿದು ಬರುತ್ತದೆ. ದೇವಾಲಯವನ್ನು ಕಟ್ಟಲು ಸಹಾಯಕನಾದ ಪೋಷಕ ಮತ್ತು ರೂವಾರಿ ಇಬ್ಬರಿಗೂ ನಾಟ್ಯಶಾಸ್ತ್ರದಲ್ಲಿ ಆಸಕ್ತಿ ಇದ್ದಾಗ, ಅವರ ರಚನೆ ನಾಟ್ಯಕಲೆಗಾಗಿಯೇ ನಿರ್ಮಿತವಾದ ದೇವಾಲಯಗಳೇನೋ ಎನ್ನುವಂತೆ ಭಾಸವಾಗುತ್ತದೆ.

ಭಾರತದ ಇತರ ಪ್ರದೇಶಗಳ ಶಿಲ್ಪಶೈಲಿಗಳ ಬೆಳವಣಿಗೆಯನ್ನು ಅಧ್ಯಯನ ಮಾಡತೊಡಗಿದಾಗ, ಕರ್ನಾಟಕದ ಶಿಲ್ಪಗಳಲ್ಲಿ ಮಾತ್ರ ಇಷ್ಟೊಂದು ವೈವಿಧ್ಯತೆ, ವಿವಿಧ ಹಂತಗಳ ಬೆಳವಣಿಗೆಯನ್ನು ಗಮನಿಸಬಹುದು. ಯಾವುದೇ ವಿಷಯವನ್ನು ನಾಟ್ಯ ಭಂಗಿಗಳ ಮೂಲಕ ನಿವೇದಿಸುವಲ್ಲಿ ಕರ್ನಾಟಕ ಶಿಲ್ಪಿಗಳು ಯಶಸ್ವಿಯಾಗಿದ್ದಾರೆ. ಆದ್ದರಿಂದಲೇ ಕರ್ನಾಟಕ ಶಿಲ್ಪಕ್ಷೇತ್ರದಲ್ಲಿ ನಾಟ್ಯಶಿಲ್ಪಗಳು ಒಂದು ಹೊಸ ಸಂಶೋಧನಾ ರಂಗವನ್ನೇ ಸೃಷ್ಟಿಸಿವೆ ಎಂದರೆ ತಪ್ಪಾಗಲಾರದು.

ಕರ್ನಾಟಕ ಶಿಲ್ಪ, ಸಾಹಿತ್ಯ, ಚಿತ್ರ, ಶಾಸನಗಳ ಅಧ್ಯಯನದಿಂದ ಕಂಡುಬರುವ ವಿಷಯವೆಂದರೆ, ದಕ್ಷಿಣ ಭಾರತದಲ್ಲಿ ಮೊದಲಿಗೆ ಕರ್ನಾಟಕದಲ್ಲಿಯೇ ನೃತ್ಯಕಲೆಯು ಭರತನ ನಾಟ್ಯಶಾಸ್ತ್ರದ ಪದ್ಧತಿಗೆ ಅನುಸಾರವಾಗಿ ಪ್ರಚಲಿತವಿದ್ದು, ಅನಂತರ ಇತರ ಪ್ರದೇಶಗಳಿಗೆ ಪಸರಿಸಿರಬೇಕು. ಭರತನ ಬಗ್ಗೆ, ಅವನ ಸ್ಥಳ, ಕಾಲದ ಬಗ್ಗೆ, ನಾಟ್ಯಶಾಸ್ತ್ರದ ರಚನೆಯ ಬಗ್ಗೆ, ಪ್ರತಿಯ ಬಗ್ಗೆ ಅನೇಕ ವಾದ ವಿವಾದಗಳಿವೆ. ಅವುಗಳನ್ನು ಬದಿಗಿಟ್ಟು ಮೂಲವಿಷಯಕ್ಕೆ ಬರೋಣ. ಭರತನ ನಾಟ್ಯಶಾಸ್ತ್ರ ರಚಿತವಾದ ಕಾಲ ಕ್ರಿ.ಪೂ. ೨ನೇ ಶತಮಾನದಿಂದ ಕ್ರಿ.ಶ. ೨ನೇ ಶತಮಾನದ ಮಧ್ಯದಲ್ಲಿ ಎಂಬುದು ವಿದ್ವಾಂಸರ ಮತ. ಭಾರತದಾದ್ಯಂತವಿರುವ ಶಿಲ್ಪ, ಸಾಹಿತ್ಯಶೈಲಿಗಳನ್ನು ಪರಿಶೀಲಿಸಿದಾಗ ಈ ಮತವು ಸರಿ ಎನಿಸುತ್ತದೆ.

ಕರ್ನಾಟಕದಲ್ಲಿ ಕದಂಬರ ಕಾಲದಲ್ಲಿ ಶಿಲ್ಪಗಳ ಸೃಷ್ಟಿ ವಿಕಸನಗೊಂಡಿಲ್ಲದ್ದರಿಂದ ನಮಗೆ ಆ ಕಾಲದ ನಾಟ್ಯಶಿಲ್ಪಗಳು ದೊರೆಯುವುದಿಲ್ಲ. ಬಾದಾಮಿ ಚಾಲುಕ್ಯರ ಕಾಲದ ಹೆಚ್ಚಿನ ಸಾಹಿತ್ಯ ಕೃತಿಗಳು ದುರ್ಲಭ

ವಾಗಿರುವುದರಿಂದ ಶಿಲ್ಪಗಳ ಆ ಕಾಲದ ಲಲಿತಕಲೆಗಳ ಮೇಲೆ ಮತ್ತು ಸಾಮಾಜಿಕ ಜೀವನದ ಮೇಲೆ ಬೆಳಕು ಚೆಲ್ಲುತ್ತವೆ.

ಭರತನ ಅಭಿಮತದಂತೆ, ಯಾವುದೇ ಒಂದು ವಿಷಯವನ್ನು ಆಂಗಿಕ, ವಾಚಿಕ, ಆಹಾರ್ಯ ಮತ್ತು ಸಾತ್ವಿಕಾದಿ ಚತುರ್ವಿಧ ಅಭಿನಯಗಳ ಮೂಲಕ ಪರಿಣಾಮಕಾರಿಯಾಗಿ ಪ್ರತಿಬಿಂಬಿಸುವುದೇ ನಾಟ್ಯವೆನಿಸುತ್ತದೆ. ಆಂಗಿಕ ಎಂದರೆ ಅಂಗ, ಪ್ರತ್ಯಾಂಗ ಮತ್ತು ಉಪಾಂಗಗಳ ಚಲನವಲನಗಳು; ವಾಚಿಕವೆಂದರೆ ಒಂದು ಪ್ರಸಂಗವನ್ನು ಆಧರಿಸಿದ ಸಾಹಿತ್ಯ ಅಥವಾ ಸಂಗೀತ ರಚನೆ; ಆಹಾರ್ಯವೆಂದರೆ ವೇಷಭೂಷಣಗಳು, ಅಲಂಕರಣಗಳು, ಕೇಶವಿನ್ಯಾಸ, ರಂಗಮಂಟಪಸಂಯೋಜನೆ ಇತ್ಯಾದಿ ಹಾಗೂ ಸಾತ್ವಿಕ ಅಂದರೆ ವಿಷಯವನ್ನು ನಿವೇದಿಸುವಾಗ ಹೊರಹೊಮ್ಮುವ ಭಾವ, ವಿಭಾವ, ಅನುಭಾವಗಳು ಇತ್ಯಾದಿ. ಈ ಚತುರ್ವಿಧ ಅಭಿನಯಗಳಲ್ಲಿ ಯಾವುದರ ಕೊರತೆಯಾದರೂ ನಾಟ್ಯ ಪೂರ್ಣವಾಗುವುದಿಲ್ಲ. ಎಲ್ಲ ಅಭಿನಯಗಳ ಸಂಪೂರ್ಣ ಸಮನ್ವಯದ ಪ್ರಯೋಗವನ್ನು ನಾವು ಕರ್ನಾಟಕ ಶಿಲ್ಪಗಳಲ್ಲಿ ಅತ್ಯಂತ ಸೂಕ್ತ ರೀತಿಯಲ್ಲಿ ವಿನಿಯೋಗಿಸಿರುವುದನ್ನು ಕಾಣುತ್ತೇವೆ.

ಪ್ರತಿಯೊಂದು ನಾಟ್ಯಶಿಲ್ಪವೂ ಯಾವುದಾದರೂ ಪ್ರಸಂಗವನ್ನು ಆಧರಿಸಿ ರಚಿತವಾಗಿದ್ದು, ಆಯಾ ಕಾಲದಲ್ಲಿ ಪ್ರಚಲಿತವಾಗಿದ್ದ ಸಂಗೀತವಾದ್ಯಗಳ ರಚನೆ, ನುಡಿಸುವ ಪದ್ಧತಿಗಳ ಮೇಲೆ ಬೆಳಕು ಚೆಲ್ಲುತ್ತವೆ. ಆಭರಣಗಳು, ವೇಷಭೂಷಣಗಳು, ಕೇಶವಿನ್ಯಾಸ ಎಲ್ಲವೂ ಶಿಲ್ಪ ರಚನೆಗೆ ಮೆರಗನ್ನು ಕೊಡುವುದರ ಜೊತೆಗೆ ವೈವಿಧ್ಯತೆಯನ್ನುಂಟು ಮಾಡುತ್ತವೆ. ಹಲವು ಶಿಲ್ಪಗಳಲ್ಲಿ ಮುಖಭಾವ ಮತ್ತು ನಿಂತ ಭಂಗಿಯಲ್ಲಿ ವಿಶೇಷವಾದ ಭಾವವು ವ್ಯಕ್ತಗೊಳ್ಳುತ್ತದೆ. ಹೀಗೆ ಪ್ರತಿಯೊಂದು ನಾಟ್ಯಶಿಲ್ಪವನ್ನು ಈ ನಾಲ್ಕು ಅಭಿನಯಗಳ ಆಧಾರದ ಮೇಲೆ ಒರೆಹಚ್ಚಿ ನೋಡುತ್ತ ಹೋಗುವುದರಿಂದ ಕಾಲಕಾಲಕ್ಕೆ ಉಂಟಾಗುತ್ತಿರುವ ಬೆಳವಣಿಗೆಯನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ.

ಭರತನ ನಾಟ್ಯಶಾಸ್ತ್ರದಲ್ಲಿ ವಿವರಿಸಲ್ಪಟ್ಟಿರುವ ಅಂಗ, ಪ್ರತ್ಯಾಂಗ, ಉಪಾಂಗಗಳ ಚಲನೆಗಳು, ಕರ್ನಾಟಕ ಶಿಲ್ಪಗಳಲ್ಲಿ ಸ್ಫುಟವಾಗಿ ಮೂಡಿವೆ. ಶಿರಸ್ಸು, ನೇತ್ರ, ಕುತ್ತಿಗೆ, ಕೈ, ಕಾಟಿ, ಕಾಲ, ಪಾದಗಳ ಚಲನೆಗಳು ನಾಟ್ಯಶಾಸ್ತ್ರ ಪದ್ಧತಿಗೆ ಅನುಸಾರವಾಗಿ ಪ್ರತಿಬಿಂಬಿಸಲ್ಪಟ್ಟಿವೆ. ಭರತನ ೧೦೮ ಕರಣಗಳಲ್ಲಿ ಹಲವು ಕರಣಗಳು ಹಸ್ತಗಳ ವಿನಿಯೋಗ, ಪಾದಚಾರಿಗಳು ಶಾಸ್ತ್ರೀಯ ರೀತಿಯಲ್ಲಿ ಪ್ರತಿಬಿಂಬವಾಗಿವೆ. ಬಾದಾಮಿ ಚಾಲುಕ್ಯರ, ರಾಷ್ಟ್ರಕೂಟರ ಕಾಲದ ನಾಟ್ಯಶಿಲ್ಪಗಳು ಭರತನ ನಾಟ್ಯ ಸಂಪ್ರದಾಯಕ್ಕೆ ಅಂಟಿಕೊಂಡು ವಿಸ್ತೃತಗೊಂಡಿದ್ದರೆ, ಕಲ್ಯಾಣ ಚಾಲುಕ್ಯರ ಮತ್ತು ಹೊಯ್ಸಳರ ಕಾಲದಲ್ಲಿ ಭಂಗಿಗಳ ಚಲನೆಗಳಲ್ಲಿ ಹೆಚ್ಚು ಹೆಚ್ಚಾಗಿ ಲಾಲಿತ್ಯ ಮತ್ತು ಲಾಸ್ಯ ಹಾಸುಹೊಕ್ಕಾಗಿ ಮೂಡಿದಂತೆ ಕಂಡುಬರುತ್ತದೆ. ಇದಕ್ಕೆ ಕಾರಣ ಕನ್ನಡ ಸಾಹಿತ್ಯದ ಬೆಳವಣಿಗೆ, ಸಂಗೀತ ರಚನೆಯಲ್ಲಿ ಪರಿವರ್ತನೆ. ಇವುಗಳ ಆಧಾರದ ಮೇಲೆ ರಚಿತವಾದ ಕೃತಿಗಳನ್ನು ದೇವದಾಸಿಯರು, ರಾಜನರ್ತಕಿಯರು ಇನ್ನೂ ಹೆಚ್ಚಿನ ಹಾವಭಾವಗಳೊಂದಿಗೆ ಮಧುರ ರೂಪದಲ್ಲಿ ನರ್ತಿಸಲಾರಂಭಿಸಿದರು. ಇದರ ಪ್ರತಿಫಲವಾಗಿ ಸಂಗೀತವಾದ್ಯಗಳಲ್ಲೂ ಅವನದ್ಧ (ತಾಳವಾದ್ಯಗಳು) ವಾದ್ಯಗಳ ಜೊತೆಗೆ ಹೆಚ್ಚು ಹೆಚ್ಚು ತಂತಿ ಮತ್ತು ಸುಷಿರ ವಾದ್ಯಗಳ ಬಳಕೆ ಹೆಚ್ಚಾಗಿ ಆಗಲು ತೊಡಗಿತು.

ರಾಜಮನೆತನದ ಸ್ತ್ರೀಯರು ನೃತ್ಯವನ್ನು ಒಂದು ಕಲೆಯನ್ನಾಗಿ ಸ್ವೀಕರಿಸಿ ಕಲಿಯಲು ಪ್ರಾರಂಭ ಮಾಡಿದಾಗ ಅದು ಶಾಸ್ತ್ರೀಯ ಸ್ವರೂಪದೊಂದಿಗೆ ರಾಜಾಶ್ರಯ ದೊರಕಿ, ಉತ್ತಮ ರಚನೆಗಳೊಂದಿಗೆ ವಿಕಸನಗೊಳ್ಳುತ್ತಾ ಬಂದಿತು. ನೃತ್ಯಕಲೆ ಒಂದು ಪೂಜಾವಿಧಿ. ದೇವಾಲಯದ ಸುತ್ತಲೂ ಆಗ ಪ್ರಚಲಿತವಿದ್ದ ನೃತ್ಯ ಸಂಪ್ರದಾಯಗಳನ್ನು ಶಿಲ್ಪಗಳ ಮುಖಾಂತರ ಚಿತ್ರಿಸುವ ಅಭ್ಯಾಸ ಪರಿಪಾಠವಾಯಿತು. ಅದೇ ಸಮಯದಲ್ಲಿ ಭರತನ ನಾಟ್ಯಶಾಸ್ತ್ರವನ್ನನುಸರಿಸಿ ಸೋಮೇಶ್ವರನ ಮಾನಸೋಲ್ಲಾಸ, ಶಾರ್ಙ್ಗದೇವನ ಸಂಗೀತರತ್ನಾಕರ ಗ್ರಂಥಗಳ ರಚನೆಯಾಯಿತು. ಶಿವಪ್ಪನಾಯಕನ ಶಿವತತ್ವರತ್ನಾಕರ ಅಭಿನವ ಪಂಪನಿಂದ ಹಿಡಿದು ರತ್ನಾಕರವರ್ಣಿಯವರೆಗೂ ಪ್ರತಿಯೊಬ್ಬ ಕವಿಯೂ ತನ್ನ ಕಾವ್ಯರಚನೆಯಲ್ಲಿ ನರ್ತನಭಾಗವನ್ನು ವರ್ಣಿಸುವಾಗ ಭರತನ ನಾಟ್ಯಶಾಸ್ತ್ರದ ಎಲ್ಲ ಪದಗಳನ್ನೂ ಬಳಸುವುದನ್ನು ಕಾಣುತ್ತೇವೆ.

ಹೀಗೆ ಭರತನ ನಾಟ್ಯಶಾಸ್ತ್ರದ ಪ್ರಯೋಗವನ್ನು ಬಾದಾಮಿಯ ಚಾಲುಕ್ಯರ ಶಿಲ್ಪಗಳಿಂದ ಹಿಡಿದು ವಿಜಯ ನಗರ ಕಾಲದ ಶಿಲ್ಪಗಳವರೆಗೆ ವಿವಿಧ ಹಂತದಲ್ಲಿ, ರೂಪ ಗಳಲ್ಲಿ ಕಾಣಬಹುದು. ಕಾವ್ಯಗಳಲ್ಲಿ ನಾಟ್ಯಪ್ರಸಂಗದ ವರ್ಣನೆಗಳು ಈ ಒಂದು ವಿಷಯವನ್ನು ತಿಳಿಯುವಲ್ಲಿ ಒತ್ತುಗೊಡುತ್ತವೆ. ಶಿಲ್ಪ, ಕಾವ್ಯ, ಆಧಾರ ಗ್ರಂಥಗಳ ತುಲನಾತ್ಮಕ ಅಭ್ಯಾಸವು ಕರ್ನಾಟಕದ ನೃತ್ಯ ಸಂಪ್ರ ದಾಯಕ್ಕೆ ಒಂದು ನಿಶ್ಚಿತರೂಪ ಕೊಡಲು ಆಧಾರಸ್ತಂಭ ವಾಗಿದೆ.